ಸದನದಲ್ಲಿ ಉತ್ತರಿಸುವ ಪ್ರಶ್ನೆ



ಕರ್ನಾಟಕ ವಿಧಾನ ಪರಿಷತ್ತು

ನೂರ ನಲವತ್ತನೆಯ ಅಧಿವೇಶನ

ಮಂಗಳವಾರ, ದಿನಾಂಕ : 03 ನೇ ಮಾರ್ಚ್, 2020

ಸ್ಮಾರ್ಟ್‌ಸಿಟಿ ಯೋಜನೆಯ ಬಗ್ಗೆ

ಶ್ರೀ ಐವನ್ ಡಿ'ಸೋಜಾ (ನಾಮನಿರ್ದೇಶನ ಹೊಂದಿದವರು):-

ಶ್ರೀ ಎನ್. ಅಪ್ಪಾಜಿಗೌಡ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ):-

022 (64+145) ಮಾನ್ಯ ನಗರಾಭಿವೃದ್ಧಿ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ :-

(ಅ) 2018-19, 2019-20ರಲ್ಲಿ ಕರ್ನಾಟಕದಲ್ಲಿ ಸ್ಮಾರ್ಟ್‌ಸಿಟಿ ಅಭಿವೃದ್ಧಿಗೆ ಕೇಂದ್ರ ಸರ್ಕಾರದಿಂದ ಬಿಡುಗಡೆ ಮಾಡಿದ ಅನುದಾನವೆಷ್ಟು ; ರಾಜ್ಯ ಸರ್ಕಾರದಿಂದ ಬಿಡುಗಡೆ ಮಾಡಿದ ಅನುದಾನವೆಷ್ಟು ; ಸದರಿ ಅನುದಾನವನ್ನು ಯಾವ ಯಾವ ಯೋಜನೆಗಳಿಗೆ ಉಪಯೋಗಿಸಲು ನಿರ್ಧರಿಸಲಾಗಿದೆ ; ಸ್ಮಾರ್ಟ್‌ಸಿಟಿ ಯೋಜನೆಯಡಿ ಗುರುತಿಸಿರುವ ನಗರಗಳವಾರು ಸಂಪೂರ್ಣ ಮಾಹಿತಿ ನೀಡುವುದು ; (ವಿವರ ಒದಗಿಸುವುದು)

(ಆ) ಸ್ಮಾರ್ಟ್‌ಸಿಟಿ ಕಂಪನಿಯು ಅಧಿಕಾರಿಗಳಿಗೆ ಸಂಬಳ ನೀಡುವುದಕ್ಕಾಗಿ ಮಾತ್ರ ಸೀಮಿತಗೊಂಡಿವೆ ಎಂಬ ಭಾವನೆಗಳಿದ್ದು ಈ ಬಗ್ಗೆ ಸರ್ಕಾರದ ನಿಲುವೇನು;

(ಇ) ಸ್ಮಾರ್ಟ್‌ಸಿಟಿ ಮತ್ತು ನಗರ ಪಾಲಿಕೆಗಳಲ್ಲಿ ಎರಡು ಸಂಸ್ಥೆಗಳು ಒಂದೇ ಬಗೆಯ ಕಾರ್ಯ ನಿರ್ವಹಣೆ ಮಾಡುತ್ತಿದ್ದು, ಸ್ಮಾರ್ಟ್‌ಸಿಟಿಯು ಜನರ ದುಡ್ಡು ಪೋಲು ಮಾಡುವ ಒಂದು ಕಂಪನಿಯಾಗಿದ್ದು, ಈ ಬಗ್ಗೆ ಇಲಾಖೆ ವಿಚಾರಣೆ ನಡೆಸಿದೆಯೇ;

(ಈ) ಸ್ಮಾರ್ಟ್‌ಸಿಟಿಯಿಂದ ರಾಜ್ಯದ ಯಾವ ನಗರ ಪಾಲಿಕೆಗಳಲ್ಲಿ ಈವರೆಗೆ ಅಭಿವೃದ್ಧಿ ಕಾರ್ಯಕ್ರಮ ಕೈಗೊಂಡು ಸಂಪೂರ್ಣಗೊಳಿಸಲಾಗಿದೆ ; (ವಿವರ ಒದಗಿಸುವುದು)

(ಉ) ಮಂಗಳೂರು ಸ್ಮಾರ್ಟ್‌ಸಿಟಿ ಕಂಪನಿ ಸಿಬ್ಬಂದಿಗಳಿಗೆ ತಿಂಗಳಿಗೆ ತಗಲುವ ವೆಚ್ಚ ಎಷ್ಟು ; ಎಂ.ಡಿ.ಗೆ ನೀಡುವ ಸೌಲಭ್ಯಗಳು ಯಾವುವು ; (ವಿವರ ಒದಗಿಸುವುದು)

(ಊ) ಸ್ಮಾರ್ಟ್‌ಸಿಟಿ ಯೋಜನೆಯಡಿ ರಾಜ್ಯದಲ್ಲಿ ಗುರುತಿಸಲಾದ ನಗರಗಳಲ್ಲಿ ಯಾವ ಯಾವ ಕಾಮಗಾರಿಗಳನ್ನು ಮಾಡಲು ನಿರ್ಧರಿಸಲಾಗಿದೆ ; ಈ ಕಾಮಗಾರಿಗಳು ಯಾವಾಗ ಪ್ರಾರಂಭಗೊಂಡವು ;

(ಋ) ಸದರಿ ಕಾಮಗರಿಗಳಲ್ಲಿ ಯಾವ ಯಾವ ಕಾಮಗಾರಿಗಳು ಪೂರ್ಣಗೊಂಡಿವೆ ಮತ್ತು ಯಾವ ಯಾವ ಕಾಮಗಾರಿಗಳು ಪೂರ್ಣಗೊಂಡಿರುವುದಿಲ್ಲ ; ವಿಳಂಭವಾಗಲು ಕಾರಣಗಳೇನು ;

(ಎ) ಇನ್ನು ಪ್ರಾರಂಭವಾಗದ ಕಾಮಗಾರಿಗಳಾವುವು ; ಸದರಿ ಕಾಮಗಾರಿಗಳಿಗೆ ನಿಗಧಿಪಡಿಸಿರುವ ಅನುದಾನಗಳೆಷ್ಟು ; ಸದರಿ ಕಾಮಗಾರಿಗಳನ್ನು ಪೂರ್ಣಗೊಳಿಸಲು ಯಾವ ಕಾಲಮಿತಿಯನ್ನು ನಿಗಧಿಪಡಿಸಲಾಗಿದೆ ;

(ಏ) ಸದರಿ ಕಾಮಗಾರಿಗಳ ಗುಣಮಟ್ಟವನ್ನು ಪರಿಶೀಲಿಸಲು ಯಾವ ಏಜೆನ್ಸಿಗಳಿಗೆ ಯಾವ ಯಾವ ಕಾಮಗಾರಿಗಳನ್ನು ನೀಡಲಾಗಿದೆ ; ಸ್ಮಾರ್ಟ್‌ಸಿಟಿ ಯೋಜನೆಯಡಿ ಗುರುತಿಸಿರುವ ನಗರಗಳವಾರು ಸಂಪೂರ್ಣ ಮಾಹಿತಿ ನೀಡುವುದು ;

(ಐ) ಸ್ಮಾರ್ಟ್‌ಸಿಟಿ ಯೋಜನೆಯ ಅನುಷ್ಠಾನಕ್ಕೆ Special Purpose Vehicle ಅನ್ನು ರೂಪಿಸಲಾಗಿದೆಯೇ, ಸದರಿ Special Purpose Vehicle ಗಳಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ಅಧಿಕಾರಿಗಳ ಹೆಸರು ಮತ್ತು ಹುದ್ದೆಗಳ ವಿವರ ಮತ್ತು ಅವರಿಗೆ ಈವರೆವಿಗೂ ನೀಡಿರುವ ಮತ್ತು ನೀಡುತ್ತಿರುವ ಸಂಬಳಗಳು ಹಾಗೂ ಭತ್ಯೆಗಳ ವಿವರ ಪ್ರತ್ಯೇಕವಾಗಿ ನೀಡುವುದು ; ಸ್ಮಾರ್ಟ್‌ಸಿಟಿ ಯೋಜನೆಯಡಿ ಗುರುತಿಸಿರುವ ನಗರಗಳವಾರು ಸಂಪೂರ್ಣ ಮಾಹಿತಿ ನೀಡುವುದು ?